ನವಸಾಕ್ಷರ ಪುಸ್ತಕ ಮಾಲೆ ೧೦೬

# ಗಿರಿಜನರು

ಹಿ.ಚಿ. ಬೋರಲಿಂಗಯ್ಯ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ - ೧೦೬

# ಗಿರಿಜನರು

ಹಿ. ಚಿ. ಬೋರಲಿಂಗಯ್ಯ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧

GIRIJANARU : By Hi. Chi. Boralingaiah. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಡಾ. ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.




# ಗಿರಿಜನರು

ನಮ್ಮ ರಾಜ್ಯದ ಭೂಮಿಯನ್ನು ಮೂರು ಭಾಗ ಮಾಡಬಹುದು. ಬಯಲುಸೀಮೆ, ಮಲೆನಾಡು ಮತ್ತು ಕರಾವಳಿ. ಮಲೆನಾಡು ಎಂದರೆ ಬೆಟ್ಟಗಳ ಪ್ರದೇಶ. ನಮ್ಮ ರಾಜ್ಯದ ಮಲೆನಾಡಿನ ಭಾಗವನ್ನು 'ಸಹ್ಯಾದ್ರಿ' ಎಂದು ಕರೆಯುತ್ತಾರೆ. ಈ ಬೆಟ್ಟಗುಡ್ಡಗಳು ದಟ್ಟವಾದ ಕಾಡಿನಿಂದ ತುಂಬಿವೆ. ಆ ಕಾಡಿನಲ್ಲಿ ನೂರಾರು ಬಗೆಯ ಮರಗಿಡಗಳಿವೆ. ಹಾಗೆಯೇ ಹತ್ತಾರು ಬಗೆಯ ಪ್ರಾಣಿ ಪಕ್ಷಿಗಳು ಇರುತ್ತವೆ. ಇಂಥ ಕಾಡಿನ ಪರಿಸರದಲ್ಲಿ ಜನರೂ ವಾಸಿಸುತ್ತಾರೆ. ದಟ್ಟವಾದ ಕಾಡಿನ ಒಳಭಾಗದ ಇವರನ್ನು ಗಿರಿಜನ ಎಂದು ಕರೆಯುತ್ತೇವೆ.

ಇವರನ್ನು 'ಗಿರಿಜನ' ಎಂದು ಏಕೆ ಕರೆಯುತ್ತೇವೆ? ಮುಂದುವರೆದ ಜನಗಳಂತೆ ಇವರು ಪೇಟೆ, ಪಟ್ಟಣಗಳನ್ನು ಕಂಡವರಲ್ಲ. ವಾಹನಗಳನ್ನು ನೋಡಿದವರಲ್ಲ. ಆಧುನಿಕವಾದ ಉಡುಪುಗಳನ್ನು ಧರಿಸುವವರಲ್ಲ. ಹಾಗೆಂದು ಇವರ ಜೀವನ ಕೀಳಾದುದು ಎಂದು ಭಾವಿಸಬೇಕಾಗಿಲ್ಲ. ಇವರಿಗೆ ಇವರದೇ ಆದ ಜೀವನ ವಿಧಾನ ಇದೆ. ಇವರದೇ ಆದ ರೀತಿಯ ಅಡುಗೆ-ಉಡುಗೆ ಮತ್ತು ಆಚಾರ-ವಿಚಾರಗಳಿವೆ. ಗುಡ್ಡಬೆಟ್ಟಗಳಲ್ಲಿಯೇ ಇವರ ದೇವರುಗಳಿರುತ್ತವೆ.

ಮರ-ಗಿಡಗಳಲ್ಲಿಯೇ ದೈವಗಳನ್ನು ಕಾಣುತ್ತಾರೆ. ಸರಳವಾದ ಆಚರಣೆಗಳ ಮೂಲಕ ದೇವರನ್ನು ಆರಾಧಿಸುತ್ತಾರೆ. ಹೀಗೆ ನಾಗರಿಕ ಜನರಿಂದ ದೂರವಿದ್ದು ತಮ್ಮದೇ ಆದ ರೀತಿಯ ಪ್ರತ್ಯೇಕ ಬದುಕನ್ನು ನಡೆಸುವ ಇವರೇ ಗಿರಿಜನರು. ಕಾಡಿನ ನಡುವೆ ಗಿರಿಯ ತಪ್ಪಲುಗಳಲ್ಲಿ ವಾಸಿಸುವ ಇವರನ್ನು ಗಿರಿಯ ಮಕ್ಕಳು ಎಂದು ಕರೆಯುತ್ತಾರೆ. ಇಂಥ ಕಾಡಿನ ಮಕ್ಕಳು ನಮ್ಮ ರಾಜ್ಯದಲ್ಲಿ ಎಲ್ಲೆಲ್ಲಿ ಇದ್ದಾರೆ? ಹೇಗೆ ಬದುಕುತ್ತಿದ್ದಾರೆ? ಎಂಬುದನ್ನು ಈಗ ನೋಡೋಣ.

ನಮ್ಮ ರಾಜ್ಯದ ಮೈಸೂರು, ಕೊಡುಗು, ಚಿಕ್ಕಮಗಳೂರು, ಶಿವಮೊಗ್ಗ, ದಕ್ಷಿಣ-ಕನ್ನಡ ಹಾಗೂ ಉತ್ತರ-ಕನ್ನಡ ಜಿಲ್ಲೆಗಳಲ್ಲಿ ಗಿರಿಜನರು ಇದ್ದಾರೆ. ಈ ಜಿಲ್ಲೆಗಳಲ್ಲಿ ಇರುವ ಅಪಾರವಾದ ಕಾಡು ಇವರಿಗೆ ನೆಲೆಯಾಗಿದೆ. ಹರಿಯುವ ಹಳ್ಳ, ಬೆಳೆದುನಿಂತ ತೋಟ, ವಿಪುಲವಾದ ಕಾಡು ಇವೆಲ್ಲ ಇವರ ಜೀವನದ ದಾರಿಗಳು. ಈಗ ಯಾವ ಯಾವ ಜಿಲ್ಲೆಯಲ್ಲಿ ಯಾವ ಯಾವ ರೀತಿಯ ಜನ ಇದ್ದಾರೆ ಎಂದು ವಿವರವಾಗಿ ನೋಡೋಣ.

## ಮೈಸೂರು ಜಿಲ್ಲೆ

**ಸೋಲಿಗರು** : ಮೈಸೂರು ಜಿಲ್ಲೆಯಲ್ಲಿರುವ ಬಿಳಿಗಿರಿರಂಗನ ಬೆಟ್ಟ ನಿಮಗೆ ಗೊತ್ತಿರಬಹುದು. ಈ ಬೆಟ್ಟದ ಆಸುಪಾಸಿನಲ್ಲಿ 'ಸೋಲಿಗರು' ಎಂಬ ಗಿರಿಜನರಿದ್ದಾರೆ. ಇವರು ಬಿಳಿಗಿರಿರಂಗ ಹಾಗೂ ಮಲೆಯ ಮಹದೇಶ್ವರನನ್ನು ಆರಾಧಿಸುತ್ತಾರೆ. ಈ ಸೋಲಿಗರು ಮೊದಲು ಬೇಟೆಯಿಂದ ಜೀವನ ಮಾಡುತ್ತಿದ್ದವರು. ಈಗ ಅಲ್ಲಲ್ಲಿ ವ್ಯವಸಾಯ ಮಾಡುತ್ತಾರೆ. ಕಾಡುಪ್ರಾಣಿಗಳಿಂದ ರಕ್ಷಣೆ ಪಡೆಯಲು ಮರಗಳ ಮೇಲೆ ಮನೆ ಕಟ್ಟುವುದು ಇವರ ವಿಶೇಷ. ಈಗಲೂ ಅಲ್ಲೊಂದು ಇಲ್ಲೊಂದು ಇಂಥ ಮನೆಗಳನ್ನು ನಾವು ಕಾಣಬಹುದು. ಇತ್ತೀಚಿನ ದಿನಗಳಲ್ಲಿ ಕಾಡುಪ್ರಾಣಿಗಳೇ ಕಡಿಮೆಯಾಗಿರುವುದರಿಂದ ಈ ರೀತಿಯ ಮನೆಗಳು ಇಲ್ಲವಾಗಿವೆ.

ಆನೆಗಳನ್ನು ಪಳಗಿಸುವ, ಜೇನು ಕೀಳುವ ಹಾಗೂ ಬೇಟೆಯಾಡುವ ವಿಚಾರದಲ್ಲಿ ಇವರು ಪಳಗಿದವರು. ಇಂಥ ಸಾಹಸದಲ್ಲಿ ಹೆಸರು ಮಾಡಿದ್ದ



ಮರದ ಮೇಲೆ ಸೋಲಿಗರ ಗುಡಿಸಲು

ಕಾರಯ್ಯ ಮತ್ತು ಬಿಲ್ಲಯ್ಯ ಎನ್ನುವವರು ಇವರ ಪಂಗಡದ ವೀರರಾಗಿದ್ದರು. ಇವರ ಬಗ್ಗೆ ಸೋಲಿಗರಲ್ಲಿ ಅಪಾರ ಕಥೆಗಳಿವೆ. ಮಲೆ ಮಹದೇಶ್ವರನ ಕಾವ್ಯದಲ್ಲಿ ಸೋಲಿಗರ ನೀಲಯ್ಯ ಮತ್ತು ಅವನ ಹೆಂಡತಿ ಸಂಕಮ್ಮ ಇವರ ಕಥೆ ತುಂಬಾ ಹೆಸರುವಾಸಿಯಾದದ್ದು. ಈ ಸೋಲಿಗರಲ್ಲಿ ಅನೇಕ ಪಂಗಡಗಳೂ ಇವೆ. ಕಾಡು ಸೋಲಿಗ, ಮರ ಸೋಲಿಗ, ಬುರುಡೆ ಸೋಲಿಗ ಮುಂತಾದ ಕುಲಗಳ ಹೆಸರನ್ನು ಇವರು ಹೇಳುತ್ತಾರೆ. ಸಂಕ್ರಾಂತಿ ಹಬ್ಬ ಇವರಿಗೆ ಮುಖ್ಯವಾದುದು. ಹಾಗೆಯೇ ಯುಗಾದಿ ಮತ್ತು ಗೌರಿ ಹಬ್ಬವನ್ನು ಮಾಡುತ್ತಾರೆ.

ಬಿಳಿಗಿರಿರಂಗನ ಹಬ್ಬದಲ್ಲಿ 'ಸೋಲಿಗರ ಸೇವೆ' ಎಂಬ ತೆಪ್ಪೋತ್ಸವ ನಡೆಸುತ್ತಾರೆ. ಸೋಲಿಗರ ಭಾಷೆ ಕನ್ನಡ. ಇವರಲ್ಲಿ ಹತ್ತಾರು ಬಗೆಯ ಜನಪದ ಕಥೆಗಳು, ಹಾಡುಗಳು ರೂಢಿಯಲ್ಲಿವೆ.

## ಕಾಡು ಕುರುಬರು, ಜೇನು ಕುರುಬರು

ಮೈಸೂರು ಜಿಲ್ಲೆಯ ಕಾಕನ ಕೋಟೆ, ಹೆಗ್ಗಡದೇವನ ಕೋಟೆ ಹಾಗೂ ಕೊಡಗು ಜಿಲ್ಲೆಯ ಅನೇಕ ಭಾಗಗಳಲ್ಲಿ ಕಾಡು ಕುರುಬರು ಮತ್ತು ಜೇನು ಕುರುಬರು ಎಂಬ ಜನಾಂಗದವರಿದ್ದಾರೆ. ಬೇಟೆ ಮತ್ತು ಜೇನು ಕೀಳುವುದು ಇವರ ಕೆಲಸ. ಸಾಹಸಿಗರಾದ ಇವರು ಆನೆಗಳನ್ನು ಪಳಗಿಸಬಲ್ಲರು. ಇವರು ಮೊದಲಿನಿಂದಲೂ ಅಲೆಮಾರಿಗಳು. ಬಿಲ್ಲುಗಾರಿಕೆಯಲ್ಲಿ ತುಂಬ ಹೆಸರಾದವರು. ಆದ್ದರಿಂದ ತಲಕಾಡಿನ ಗಂಗರಿಂದ ಟಿಪ್ಪೂಸುಲ್ತಾನನವರೆಗೆ ಸೈನ್ಯದಲ್ಲಿಯೂ ಇವರನ್ನು ಬಳಸಿಕೊಳ್ಳಲಾಗುತ್ತಿತ್ತು. ಈಗಲೂ ಅರಣ್ಯ ಇಲಾಖೆಯವರು ಸಾಹಸ ಕಾರ್ಯಗಳಿಗೆ ಇವರನ್ನು ಬಳಸಿಕೊಳ್ಳುತ್ತಾರೆ.

ಈಗ ಇವರು ಅಲೆಮಾರಿಗಳಲ್ಲ. ಒಂದು ಕಡೆ ನೆಲೆ ನಿಂತಿದ್ದಾರೆ. ಹುಲ್ಲಿನ ಸೂರಿಗೆ ಬಿದಿರಿನ ತಡಿಕೆಗಳ ಗೋಡೆ. ಇಂಥ ಸರಳ ಮನೆಗಳ

ಸಮೂಹವನ್ನು 'ಹಾಡಿ' ಎಂದು ಕರೆಯುತ್ತಾರೆ. ಇಂಥ ಹಾಡಿಗಳ ಮಧ್ಯೆ ಚಾವಡಿ ಇರುತ್ತದೆ. ಇಲ್ಲಿ ನ್ಯಾಯ ಮತ್ತು ಪಂಚಾಯತಿಗಳನ್ನು ಮಾಡಲಾಗುತ್ತದೆ. ಸ್ವಂತ ಜಮೀನು ಯಾರಿಗೂ ಇಲ್ಲ. ಆದ್ದರಿಂದ ಕಾಡಿನ ವಸ್ತುಗಳನ್ನು ಸಂಗ್ರಹಿಸುವುದೇ ಇವರ ಕೆಲಸ.

ಬೀರ, ಬೇಟೆದೇವ ಮತ್ತು ಸಿದ್ಧ ಇವರ ಗಂಡು ದೇವರು. ಬೆಟ್ಟದ ಚಿಕ್ಕಮ್ಮ, ಕರಿತಾಯಿ, ಕೊಟ್ಟಿದಮ್ಮ, ಮಾಸ್ತಮ್ಮ ಇವರ ಹೆಣ್ಣು ದೇವರು. ಇವರು 'ಕುಂಡೆ' ಹಬ್ಬ ಎಂಬ ವಿಶೇಷ ಹಬ್ಬವನ್ನು ಆಚರಿಸುತ್ತಾರೆ. ಅನೇಕ ರೀತಿಯ ಕಥೆ ಮತ್ತು ಪದಗಳನ್ನು ಹಾಡುತ್ತಾರೆ. ರಾತ್ರಿಯಲ್ಲಿ ಬೆಂಕಿ ಹಾಕಿ, ಅದರ ಮುಂದೆ ಕೋಲಾಟ ಆಡುವುದು ಇವರ ಮುಖ್ಯ ಕಲೆ. ಹಬ್ಬದಲ್ಲಿ ಕುದುರೆ ಕುಣಿತ ಮಾಡುತ್ತಾರೆ. ಹೆಂಗಸರೂ, ಗಂಡಸರೆನ್ನದೆ ಒಟ್ಟಾಗಿ ಕುಣಿಯುವುದು ಇವರ ಹವ್ಯಾಸ.

## ಕೊಡಗು ಜಿಲ್ಲೆ

**ಯರವರು**: ಕೊಡಗಿನ ದಟ್ಟ ಕಾಡಿನಲ್ಲಿ 'ಯರವರು' ಎಂಬ ವಿಶೇಷ ಜನಾಂಗದವರಿದ್ದಾರೆ. ಕನ್ನಡ, ಕೊಡವ, ಮಲೆಯಾಳೀ ಭಾಷೆಗಳಲ್ಲದೆ ಯರವ ಎಂಬ ಉಪಭಾಷೆಯೂ ಇದೆ. ಈ 'ಯರವ' ಉಪಭಾಷೆಯಲ್ಲಿ ಹಾಡು ಕಥೆಗಳನ್ನು ಕಟ್ಟಿದ್ದಾರೆ. 'ದುಡಿ' ಇವರ ಮುಖ್ಯ ವಾದ್ಯ. ದುಡಿಯನ್ನು ಬಾರಿಸುತ್ತಾ ಬೆಳದಿಂಗಳಲ್ಲಿ ಒಟ್ಟಾಗಿ ಕುಣಿಯುತ್ತಾರೆ. ಇವರಿಗೆ ಬೇರೆ ಜನರ ಸಂಪರ್ಕ ಕಡಿಮೆ. ಆ ಕಾಡಿನ ಮೂಲನಿವಾಸಿಗಳು ಎಂದು ಇವರನ್ನು ಕರೆಯಲಾಗುತ್ತದೆ.

ಮೊದಲಿಗೆ ಇವರು 'ಕುಮರಿ' ಬೇಸಾಯ ಮಾಡುತ್ತಿದ್ದರಂತೆ. ಕುಮರಿ ಬೇಸಾಯ ಎಂದರೆ ಕಾಡನ್ನು ಉತ್ತು ಬೆಳೆ ತೆಗೆಯುವುದು. ನಂತರ ಮುಂದಿನ



**ಯರವ ಮಹಿಳೆಯರು**

ವರ್ಷ ಮತ್ತೊಂದು ಜಾಗದಲ್ಲಿ ಇದೇ ರೀತಿ ಬೆಳೆ ತೆಗೆಯುವುದು. ಹೀಗಾಗಿ ಇವರು ಒಂದು ಕಡೆ ನೆಲೆ ನಿಂತವರಲ್ಲ. ಈಗಲೂ ಸ್ವಂತ ಜಮೀನುಗಳಿಲ್ಲ. ಒಡೆಯರ ತೋಟದ ಕೂಲಿಯೇ ಜೀವನಾಧಾರ. ವಿದ್ಯಾಭ್ಯಾಸ ಇಲ್ಲವೇ ಇಲ್ಲ. ಹಣಕಾಸಿನ ತೊಂದರೆ ಅಪಾರ. ಒಟ್ಟಾರೆ ಬಡತನವೇ ಇವರ ಬಾಳಾಗಿದೆ.

## ದಕ್ಷಿಣ ಕನ್ನಡ ಜಿಲ್ಲೆ

**ಮಲೆ ಕುಡಿಯರು**: ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಬಂಟ್ವಾಳ, ಬೆಳ್ತಂಗಡಿ ತಾಲ್ಲೂಕುಗಳಲ್ಲಿ 'ಮಲೆಕುಡಿಯರು' ಎಂಬ ಜನರಿದ್ದಾರೆ. ಚಿಕ್ಕಮಗಳೂರು ಜಿಲ್ಲೆಯ ಘಟ್ಟಗಳಲ್ಲಿಯೂ ಇವರು ಕಂಡು ಬರುತ್ತಾರೆ. ಇವರೂ ಕೂಡ ಅನಾದಿಕಾಲದ ಜನ.



ಮಲೆಕುಡಿಯ ದಂಪತಿಗಳು

ಬೇಟೆಯಾಡುವುದು, ಹೆಂಡ ಇಳಿಸುವುದು, ತೋಟಗಳಲ್ಲಿ ಕೆಲಸ ಮಾಡುವುದು ಇವರಿಗೆ ಜೀವನಾಧಾರ. ಭಾರಿ ಕಾಡಿನ ನಡುವೆ ಹಳ್ಳಕೊಳ್ಳಗಳಲ್ಲಿ ಇವರ ಗುಡಿಸಲುಗಳು ಇರುತ್ತವೆ. ಕಾಡಿನ ಮರಗಿಡಗಳನ್ನು ಚೆನ್ನಾಗಿ ಬಲ್ಲವರು ಇವರು. ಇತ್ತೀಚೆಗೆ ಕಾಡಿನ ಉತ್ಪನ್ನಗಳ ಸಂಗ್ರಹ ಮಾಡುತ್ತಿದ್ದಾರೆ. ತುಳು ಇವರ ತಾಯಿ ಭಾಷೆ. ಭೂತಗಳಲ್ಲಿ ಇವರಿಗೆ ನಂಬಿಕೆ. ಪ್ರಕೃತಿಯನ್ನು ಆರಾಧಿಸುವ ಇವರು ಆಡಂಬರದ ಆಚರಣೆ ಮಾಡುವವರಲ್ಲ. ಪೇಟೆ ಪಟ್ಟಣಗಳನ್ನು ಇಂದಿಗೂ ನೋಡದವರೇ ಹೆಚ್ಚು.

**ಕೊರಗರು**: ಇದೇ ದಕ್ಷಿಣ ಕನ್ನಡ ಜಿಲ್ಲೆಯ 'ಕೊರಗರು' ಮತ್ತೊಂದು ವಿಶೇಷ ಜನಾಂಗ. ಕೊರಗರ 'ಡೋಲು ಬಡಿತ' ದಕ್ಷಿಣ ಕನ್ನಡದಲ್ಲಿಯೇ ಪ್ರಸಿದ್ಧವಾದುದು. ದಕ್ಷಿಣಕನ್ನಡ 'ಕಂಬಳ'ಕ್ಕೆ ಹೆಸರುವಾಸಿಯಾದುದು. ನೀರಿನ ಗದ್ದೆಗಳಲ್ಲಿ ಕೋಣಗಳನ್ನು ಓಡಿಸುವ ಸ್ಪರ್ಧೆಯೇ ಕಂಬಳ. ಈ ಕಂಬಳದಲ್ಲಿ ಕೊರಗರ ಪಾತ್ರ ಪ್ರಮುಖವಾದುದು. ಇವರಿಗೆ ಕಂಬಳ ಕೇವಲ ಮನರಂಜನೆಯಲ್ಲ. ಅದೊಂದು ಆರಾಧನೆ. ಕಂಬಳದ ಹಿಂದಿನ ದಿನ ಇವರು ಮಾಡುವ ಹಬ್ಬ ಆಚರಣೆಗಳು ತುಂಬಾ ವಿಶೇಷವಾಗಿರುತ್ತವೆ. ಕೊರಗರ 'ಭೂತಾರಾಧನೆ'ಯೂ ವಿಶೇಷವೇ. ಕೋಲ ಕಟ್ಟುವುದರಲ್ಲಿ ಇವರು ನಿಸ್ಸೀಮರು. ಸ್ವಂತ ಜಮೀನು ಇಲ್ಲದ ಇವರೂ ಕೂಡ ಕೂಲಿಯನ್ನೇ ಜೀವನಾಧಾರ ಮಾಡಿಕೊಂಡಿದ್ದಾರೆ. ಹಣಕಾಸಿನ ವಿಚಾರವಾಗಿ ತುಂಬಾ ಹಿಂದುಳಿದಿರುವ ಇವರಿಗೆ ವಿದ್ಯಾಭ್ಯಾಸವೂ ಇಲ್ಲವಾಗಿದೆ.

**ದಕ್ಷಿಣ ಕನ್ನಡ ಜಿಲ್ಲೆಯ ಇನ್ನಿತರ ಗಿರಿಜನರು**: ಇದೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇನ್ನೂ ಹಲವಾರು ರೀತಿಯ ಗಿರಿಜನರಿದ್ದಾರೆ. 'ಮೇರ', 'ಮನ್ಸ', 'ಭೈರರು', 'ಹಗೇರರು', 'ಕುಡುಬಿಯರು', 'ಮರಾಠಿ'ಗರು ಮುಂತಾಗಿ ಕರೆಸಿಕೊಳ್ಳುವ ಈ ಗಿರಿಜನರು ಕಾಡುಗಳ ನಡುವೆ ಬಡತನದಲ್ಲಿಯೇ ಬಾಳುತ್ತಿದ್ದಾರೆ. ಇವರೆಲ್ಲರಲ್ಲಿ



**ಆಟಿಕಳಂಜ**

ಬಡತನವಿರಬಹುದು. ಆದರೆ, ಇವರಲ್ಲಿರುವ ಹಾಡುಗಳು, ಕಥೆಗಳು, ಮತ್ತು ಆಚರಣೆಗಳು ಅವರ ಸಿರಿವಂತಿಕೆಯನ್ನು ಸೂಚಿಸುತ್ತವೆ.

## ಶಿವಮೊಗ್ಗ ಜಿಲ್ಲೆ

**ಹಸಲರು, ಗೊಂಡರು**: ಶಿವಮೊಗ್ಗ ಜಿಲ್ಲೆ ಅಪಾರವಾದ ಕಾಡಿನ ಸಂಪತ್ತನ್ನು ಉಳ್ಳ ಜಿಲ್ಲೆ. ನೂರಾರು ವಿಧವಾದ ಬೆಲೆಬಾಳುವ ಮರಗಿಡಗಳು ಈ ಕಾಡಿನಲ್ಲಿವೆ. ಸಾಗವಾನಿ, ನಂದಿ, ನೇರಳೆ, ಹೊನ್ನೆ, ಕಡಸಲು, ಜಂಟೆ, ಬೂರಗ, ಧೂಪ,



**ಹಸಲರ ಬೇಟೆ**

ಧೂಮ, ಹಲಸು, ಹೆಟ್ಟಲಸು, ಸಳ್ಳೆ, ತಾರೆ ಮುಂತಾದ ಬೆಲೆಬಾಳುವ ಮರಗಳ ಕಾಡು ಇದು. ಪ್ರಸಿದ್ಧ ಜೋಗದ ಜಲಪಾತ ಈ ಜಿಲ್ಲೆಯಲ್ಲಿದೆ.

ಶಿವಮೊಗ್ಗ ಜಿಲ್ಲೆಯಲ್ಲಿ 'ಹಸಲರು ಮತ್ತು ಗೊಂಡರು' ಗಿರಿಜನರ ಗುಂಪಿಗೆ ಸೇರುತ್ತಾರೆ. ಲಿಂಗನಮಕ್ಕಿ ಅಣೆಕಟ್ಟು, ತಲಕಳಲೆ ಅಣೆಕಟ್ಟು ಮುಂತಾದ ಪ್ರದೇಶಗಳಲ್ಲದೆ ಅಡಿಕೆ ತೋಟಗಳ ಆಸುಪಾಸಿನಲ್ಲಿ ಹಸಲರ ವಾಸ. ಅಡಿಕೆ ತೋಟಗಳ ಕೆಲಸವೇ ಇವರ ಜೀವನಾಧಾರ. ಆದರೆ ಅಡಿಕೆ ತೋಟಗಳು ಇವರಿಗೆ ಸೇರಿಲ್ಲ. ಭೂಮಾಲೀಕರಿಗೆ ಸೇರಿದ ತೋಟಗಳಲ್ಲಿ ಇವರು ಕೂಲಿ ಮಾಡುತ್ತಾರೆ. ಮರ ಹತ್ತುವುದರಲ್ಲಿ ಅಡಿಕೆ ಗೊನೆ ಕೀಳುವುದರಲ್ಲಿ, ಕೆಳಗೆ ಇಳಿಯದೆಯೇ ಮರದಿಂದ ಮರಕ್ಕೆ ಹಾರುವ ಕಲೆಯಲ್ಲಿ ಇವರು ಪಳಗಿದವರು. ಹೀಗಾಗಿ ಒಂದು ದಿನಕ್ಕೆ ಹತ್ತಾರು ಮರಗಳನ್ನು ಏರಿ ಇಳಿಯಬಲ್ಲರು. ಹಿಂದೆ



ಗೊಂಡ ಚೆಲುವೆ

ಬೇಟೆಯಿಂದ ಜೀವನ ಸಾಗಿಸುತ್ತಿದ್ದ ಇವರು ಈಗ ಕೇವಲ ಕೂಲಿಯಾಳು ಗಳಾಗಿದ್ದಾರೆ. ಕೋಲಾಟ, ಅಂಟಿಕೆ ಪಂಟಿಕೆ, ಗೌರಿ ಹಾಡುಗಳು ಇವರಲ್ಲಿರುವ ಪ್ರಮುಖ ಕಲೆಗಳು.

ಇದೇ ಜಿಲ್ಲೆಯ ಬೇರೆ ಬೇರೆ ಘಟ್ಟಗಳಲ್ಲಿ ವಾಸ ಮಾಡುವ 'ಗೊಂಡರು' ಮುಖ್ಯವಾಗಿ ಕೃಷಿಕರು. ಅಲ್ಲಲ್ಲಿ ಸ್ವಲ್ಪ ಜಮೀನುಗಳನ್ನು ಸಂಪಾದಿಸಿದ್ದಾರೆ. ಆದರೂ ಇವರು ವಾಸ ಮಾಡುತ್ತಿರುವ ಮನೆಗಳು ಹೆಗ್ಗಾಡಿನ ನಡುವೆ ಇರುತ್ತವೆ. ಹುಲಿ, ಕಾಡೆಮ್ಮೆ, ಹಂದಿ ಮುಂತಾದ ಕಾಡುಪ್ರಾಣಿಗಳ ನಡುವೆ ಬದುಕು ವುದು ಇವರಿಗೆ ಒಗ್ಗಿಹೋಗಿದೆ. ಗೊಂಡರ ಹಬ್ಬಗಳ ಆಚರಣೆಗಳು ತುಂಬಾ ವಿಶೇಷವಾದವು. ಹಾಗೆಯೇ ಇವರ ಕುಣಿತ ಮತ್ತು ಹಾಡುಗಳು ಕೂಡ.

ವಿಶೇಷವಾಗಿ ಇವರೆಲ್ಲ ತಿರುಪತಿ ತಿಮ್ಮಪ್ಪನ ಭಕ್ತರು. ವರುಷಕ್ಕೆ ಒಂದು ಸಲ 'ಹರಿಸೇವೆ'

ಹಬ್ಬ ಮಾಡುತ್ತಾರೆ. ಗೊಂಡರ ಹೋಳಿ ಹಬ್ಬ ಕೂಡ ವಿಶೇಷವಾದುದೆ. ಗೊಂಡರ ದೇವರನ್ನು 'ಜಟ್ಟಿಗ' ಎಂದು ಕರೆಯುತ್ತಾರೆ. ಹೆಣ್ಣು ದೇವತೆಯನ್ನು 'ಕೋಗ್ತಿ' ಎಂದು ಕರೆಯುತ್ತಾರೆ. ವರುಷಕ್ಕೆ ಒಂದು ಸಲ ಇವರು ಆಚರಿಸುವ ಕೋಗ್ತಿ ಹಬ್ಬ ಹೆಸರುವಾಸಿಯಾದುದು. ಇವರು ಕುಣಿಯುವ ಸುಗ್ಗಿ ಕುಣಿತ ರಂಗುರಂಗಾಗಿರುತ್ತದೆ. ತಲೆಗೆ ಪೇಟ, ಕೆಂಪು ಪಂಚೆ, ಕಾಲಿಗೆ ಕಡಗ, ಕೈಯಲ್ಲಿ ಡಕ್ಕೆ ವಾದ್ಯ, ಡಕ್ಕೆಯ ತಾಳಕ್ಕೆ ತಕ್ಕ ಹೆಜ್ಜೆ. ಈ ಕುಣಿತ ನೋಡಿ ಆನಂದಿಸುವಂತಹುದು. ಇವರ ದೇವರುಗಳಾದ ಜಟ್ಟಿಗ, ಬ್ಯಾಟೇಬೇರ, ಮಾಸ್ತಿ, ಚೌಡಿ ಮತ್ತು ಕೋಗ್ತಿ ಇವರ ಮೇಲೆ ನೂರಾರು ಬಗೆಯ ಹಾಡುಗಳನ್ನು ಇವರು ಹಾಡುತ್ತಾರೆ.

## ಉತ್ತರ ಕನ್ನಡ ಜಿಲ್ಲೆ

ಉತ್ತರ ಕನ್ನಡ ಜಿಲ್ಲೆ ಕರ್ನಾಟಕದಲ್ಲಿಯೇ ಸುಂದರವಾದುದು. ಬೆಟ್ಟ, ಗುಡ್ಡ, ನದಿ, ಹೊಳೆ ಮತ್ತು ಸಮುದ್ರ ಇಲ್ಲಿನ ವಿಶೇಷ. ಸಮುದ್ರದ ಅಂಚಿನವರೆಗೂ ಕಾಡು ಆವರಿಸಿಕೊಂಡಿರುತ್ತದೆ. ಕಾಡಿನ ಒಳಗೆ, ನದಿಗಳ ದಂಡೆಯ ಮೇಲೆ ಮತ್ತು ಸಮುದ್ರದ ಅಂಚಿನಲ್ಲಿ ಗಿರಿಜನರು ವಾಸವಾಗಿದ್ದಾರೆ. ಕಾಡಿನಲ್ಲಿ ಸಿದ್ದಿ ಜನರು, ಗೌಳಿಗರು ವಾಸವಾಗಿದ್ದರೆ ನದಿ ಮತ್ತು ಸಮುದ್ರಗಳ ಅಂಚಿನಲ್ಲಿ ಹಾಲಕ್ಕಿ ಒಕ್ಕಲಿಗರು ಮತ್ತು ಮುಕರಿಯರು ವಾಸವಾಗಿದ್ದಾರೆ. ಗೊಂಡರ ಸಂಖ್ಯೆಯೂ ಅಪಾರವಾಗಿದೆ.

**ಸಿದ್ದಿಯರು**: ಸಿದ್ದಿಯರು ಒಂದು ವಿಶೇಷ ಜನಾಂಗ, ಇವರು ಮೂಲದಲ್ಲಿ ನಮ್ಮವರಲ್ಲ. ಆಫ್ರಿಕಾ ದೇಶದಿಂದ ಗುಲಾಮರಾಗಿ ಬಂದವರು. ನಮ್ಮ ದೇಶಕ್ಕೆ ವ್ಯಾಪಾರಕ್ಕಾಗಿ ಪೋರ್ಚುಗೀಸರು, ಬ್ರಿಟಿಷರು, ಬಂದದ್ದು ನಿಮಗೆ ಗೊತ್ತಿದೆ. ಮೊದಲಿಗೆ ಬಂದ ಪೋರ್ಚುಗೀಸರು ಕೇರಳದಿಂದ ಗೋವಾದವರೆಗೆ ವ್ಯಾಪಾರ

ಆರಂಭಿಸಿದರು. ಆಮೇಲೆ ಅಲ್ಲಿನ ಕೆಲವು ಭಾಗಗಳನ್ನು ವಶಪಡಿಸಿಕೊಂಡರು. ಇಲ್ಲಿಂದ ಸಾಂಬಾರ ಪದಾರ್ಥಗಳನ್ನು ಅವರ ದೇಶಕ್ಕೆ ಸಾಗಿಸುತ್ತಿದ್ದರು.





**ಸಿದ್ದಿಯರ ಪುಗಡಿ ಕುಣಿತ**

ಇವರ ಈ ವ್ಯಾಪಾರದ ಸಂದರ್ಭದಲ್ಲಿ ಆಫ್ರಿಕಾ ದೇಶದ ಕಾಡಿನ ಜನರನ್ನು ಇಲ್ಲಿಗೆ ಎಳೆದು ತಂದರು. ಹೀಗೆ ಪೋರ್ಚುಗೀಸರ ದಬ್ಬಾಳಿಕೆಗೆ ಒಳಗಾಗಿ ಗುಲಾಮರಾಗಿ ಬಂದವರೆ ಈ ಸಿದ್ದಿಯರು. ನೂರಾರು ವರ್ಷಗಳ

ಕಾಲ ಅವರ ಗುಲಾಮರಾಗಿ ಕೆಲಸ ಮಾಡಿದ ಇವರು, ಕಾಲಕ್ರಮೇಣ ಸ್ವತಂತ್ರರಾದರು. ಸ್ವತಂತ್ರರಾದುದೇನೋ ನಿಜ. ಆದರೆ ಜೀವನ ಹೇಗೆ? ಪೋರ್ಚುಗೀಸರ ಹಿಡಿತದಿಂದ ತಪ್ಪಿಸಿಕೊಂಡು ಕಾಡು ಸೇರಿದರು. ಕಾಡಿನಲ್ಲಿ ಬೇಟೆ, ಜೇನು ಸಾಕಾಣೆ, ಗೆಡ್ಡೆ ಗೆಣಸು ಸಂಗ್ರಹ ಮುಂತಾಗಿ ಕಲಿತುಕೊಂಡರು. ಆದರೆ ಇಂದು ಅವರ ಬೇಟೆಯಾಗಲೀ, ಕಾಡಿನ ಕೆಲಸವಾಗಲೀ ಹೊಟ್ಟೆ ತುಂಬಿಸುತ್ತಿಲ್ಲ. ಬಡತನ ಸರ್ವೇಸಾಮಾನ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ತೋಟ ತುಡಿಕೆಗಳಲ್ಲಿ ಕೂಲಿ ಮಾಡುತ್ತಿದ್ದಾರೆ. ಬಲವಾದ ಮೈಕಟ್ಟು ಇವರಿಗೆ. ಅಚ್ಚ ಕಪ್ಪುಬಣ್ಣ. ತಲೆಯಲ್ಲಿ ಗುಂಗರು ಕಟ್ಟಿದ ಕೂದಲು, ದಪ್ಪ ತುಟಿ, ಮೊಂಡು ಮೂಗು, ಇವರ ಶಕ್ತಿ ಅಸಾಧಾರಣವಾದುದು. ಹೀಗಾಗಿ ಇವರ ಮಕ್ಕಳಿಗೆ ಸರ್ಕಾರದ ವತಿಯಿಂದ ಕ್ರೀಡಾ ತರಬೇತಿ ನೀಡಲಾಗುತ್ತಿದೆ.

ಸಿದ್ದಿ ಜನರು ಈಗ ಮೂರು ಧರ್ಮಗಳಲ್ಲಿ ಹಂಚಿಹೋಗಿದ್ದಾರೆ. ಹಿಂದೂ, ಮುಸ್ಲಿಂ ಹಾಗೂ ಕ್ರಿಶ್ಚಿಯನ್ನರಾಗಿ ಇದ್ದರೂ ಪರಸ್ಪರ ಸಹಬಾಳ್ವೆ ಇದೆ. ಈ ಮೂರು ಧರ್ಮಗಳ ನಡುವೆ ಹೆಣ್ಣು ಕೊಟ್ಟು ಹೆಣ್ಣು ತರುವ ಸಂಪ್ರದಾಯವೂ ಇದೆ. ಧರ್ಮಕ್ಕಾಗಿ ಕಿತ್ತಾಡುವ ಈ ಸಂದರ್ಭದಲ್ಲಿ ಸಿದ್ದಿಯರ ಜೀವನ ಆದರ್ಶಮಯವಾಗಿದೆ. ಆಫ್ರಿಕಾದಿಂದ ಬಂದು ಈ ನೆಲದಲ್ಲಿ ಸೇರಿದವರಾದರೂ ಈ ನಾಡಿನ ಭಾಷೆ ಮತ್ತು ಕಲೆಯನ್ನು ಕಲಿತುಕೊಂಡಿದ್ದಾರೆ. ಕನ್ನಡ, ಕೊಂಕಣಿ, ಮತ್ತು ಮರಾಠಿ ಇವರ ಭಾಷೆಯಾಗಿವೆ. ಹಾಡು ಮತ್ತು ಕಲೆಗಳಲ್ಲಿಯೂ ಇವರು ಹಿಂದೆ ಬಿದ್ದಿಲ್ಲ.

ಸಿದ್ದಿ ಹೆಣ್ಣುಮಕ್ಕಳ 'ಪುಗಡಿ' ನೃತ್ಯ ವಿಶೇಷವಾದುದು. ಹೆಣ್ಣುಮಕ್ಕಳು ಕೊಡ ಹಿಡಿದು ಊದುತ್ತ ಕುಣಿಯುತ್ತಾರೆ. ಹಿಮ್ಮೇಳಕ್ಕೆ ಗುಮ್ಮಟೆಯ ವಾದ್ಯವಿರುತ್ತದೆ. ಸಿದ್ದಿಯರ ಇನ್ನೊಂದು ಕುಣಿತ 'ಡಮಾಮಿ.' ಇದನ್ನು ಯುಗಾದಿ

ಮತ್ತು ನವರಾತ್ರಿ ಹಬ್ಬಗಳಲ್ಲಿ ಕುಣಿಯುತ್ತಾರೆ. ಸುಗ್ಗಿ ಮತ್ತು ಹೋಳಿ ಕುಣಿತವೂ ಉಂಟು. ಕ್ರಿಸ್‌ಮಸ್, ರಂಜಾನ್ ಮತ್ತು ಯುಗಾದಿ ಈ ಮೂರು ಹಬ್ಬಗಳನ್ನು ಒಟ್ಟಿಗೆ ಆಚರಿಸುವ ಇವರ ಸಂಪ್ರದಾಯ ಮೆಚ್ಚುವಂಥದ್ದು. ಇಂಥ ಸಿದ್ದಿ ಜನರಿಗೆ ಬದುಕು ಮಾತ್ರ ಬಡತನದ್ದು. ಬೆವರು ಸುರಿಸಿ ದುಡಿದರೆ ಮಾತ್ರ ಅನ್ನ ಕಾಣುವ ಸ್ಥಿತಿ. ಉತ್ತರ ಕನ್ನಡದ ಎಲ್ಲಾಪುರ, ಅಂಕೋಲಾ, ಶಿರಸಿ ಮತ್ತು ಹಳಿಯಾಳ ತಾಲ್ಲೂಕುಗಳ ದಟ್ಟ ಕಾಡಿನಲ್ಲಿ ಇವರು ವಾಸವಾಗಿದ್ದಾರೆ.

**ಗೌಳಿಗರು** : ಉತ್ತರ ಕನ್ನಡ ಜಿಲ್ಲೆಯ ಹಳಿಯಾಳ, ದಾಂಡೇಲಿ, ಅಂಬಿಕಾನಗರ ಮುಂತಾದ ಸ್ಥಳಗಳಲ್ಲಿ 'ಗೌಳಿಗರು' ಎಂಬ ಜನಾಂಗವಿದೆ. ಗೌಳಿಗರು ಮಹಾರಾಷ್ಟ್ರ ರಾಜ್ಯದಿಂದ ವಲಸೆ ಬಂದವರು. ಸುಮಾರು ಮುನ್ನೂರು-ನಾನೂರು ವರ್ಷಗಳ ಹಿಂದೆ ಇವರು ವಲಸೆ ಬಂದಿರಬಹುದು. ಹೆಂಗಸರು ಸೀರೆಯನ್ನು ಕಚ್ಚೆ ಹಾಕಿ ಉಡುವುದರಿಂದ ಇವರನ್ನು 'ಕಚ್ಚೆ ಗೌಳಿಗರು' ಎಂದು ಕರೆಯಲಾಗುತ್ತದೆ. ಇವರಿಗೆ ಕೂಡ ಯಾವುದೇ ರೀತಿಯ ಜಮೀನುಗಳಿಲ್ಲ. ಇವರ ಮುಖ್ಯ ಕಸುಬು ಎಮ್ಮೆಗಳನ್ನು ಸಾಕುವುದು. ಒಂದೊಂದು ಹಟ್ಟಿಯಲ್ಲಿ ಹತ್ತಾರು ಎಮ್ಮೆಗಳು ಇರುತ್ತವೆ. ಎಮ್ಮೆಗಳ ಹಾಲನ್ನು ಪಟ್ಟಣಗಳಿಗೆ ಮಾರುವ ಮೂಲಕ ಇವರ ಜೀವನ ಸಾಗುತ್ತದೆ. ಅಂಬಿಕಾನಗರ ಮತ್ತು ದಾಂಡೇಲಿ ಪಟ್ಟಣಗಳಲ್ಲಿ ಬೆಳಗಿನ ಹೊತ್ತು ಸಾಲು ಸಾಲಾಗಿ ಹಾಲು ಹೊತ್ತು ಬರುವ ಇವರನ್ನು ಕಾಣಬಹುದು.

ಮೂಲದಲ್ಲಿ ಮಹಾರಾಷ್ಟ್ರದವರಾದುದರಿಂದ ಪಂಡರಾಪುರದ ವಿಠಲ ಇವರಿಗೆ ಮನೆ ದೇವರು. ಇವರು ಆಚರಿಸುವ 'ಹೋಳಿ ಸಿಗ್ಮ' ಎಂಬ ನೃತ್ಯ ಪ್ರಸಿದ್ಧವಾದುದು. ಹೋಳಿ ಹುಣ್ಣಿಮೆ ಬಂತೆಂದರೆ ಇವರಿಗೆಲ್ಲ ಸಡಗರ. ಹುಣ್ಣಿಮೆಯ ದಿನ ಬೆಂಕಿ ಹಾಕಿ ಅದರ ಸುತ್ತ 'ಹೋಳಿ ಸಿಗ್ಮ' ನೃತ್ಯ ಮಾಡುವುದು ಇವರಲ್ಲಿ ವಾಡಿಕೆ.



ಗೌಳಿ ಹೆಂಗಸು

ಗೌಳಿಗರು ಒಂದೆ ಒಂದು ಕಡೆ ನೆಲೆ ನಿಲ್ಲುತ್ತಿದ್ದವರಲ್ಲ. ಕಾಡುಗಳಿಂದ ಕಾಡುಗಳಿಗೆ ವಲಸೆ ಹೋಗುವುದು ಇವರ ಜೀವನವಾಗಿತ್ತು. ಇದೇ ರೀತಿಯಲ್ಲಿ ಒಂದು ಕಾಲದಲ್ಲಿ ನಮ್ಮ ರಾಜ್ಯಕ್ಕೆ ಬಂದ ಇವರು ಈಗ ನೆಲೆ ನಿಂತಿದ್ದಾರೆ. ತುಂಬಾ ಮುಗ್ಧ ಸ್ವಭಾವದ ಇವರು ಯಾರಿಗೂ ಕೇಡಕನ್ನು ಉಂಟುಮಾಡುವವರಲ್ಲ. ಹಾಲಿನ ವ್ಯಾಪಾರವಾದರೆ ಜೀವನ. ಇಲ್ಲದಿದ್ದರೆ ಇಲ್ಲ. ಬೇಸಿಗೆಗಳಲ್ಲಿ ನೀರಿಗೆ ತೊಂದರೆಯಾದರೆ ಮೂರು ತಿಂಗಳ ಕಾಲ ಈಗಲೂ ವಲಸೆ ಹೋಗುತ್ತಾರೆ. ಮತ್ತೆ ಮಳೆಗಾಲಕ್ಕೆ ತಮ್ಮ ಜಾಗಕ್ಕೆ ಹಿಂತಿರುಗುತ್ತಾರೆ. ನವರಾತ್ರಿ, ಹೋಳಿ,

ದೀಪಾವಳಿ ಇವರ ಪ್ರಮುಖ ಹಬ್ಬಗಳು. ಮರಾಠಿ ಇವರ ಭಾಷೆ. ಮರಾಠಿಯಲ್ಲಿ ಹಲವು ವಿಧವಾದ ಹಾಡು ಮತ್ತು ಕಥೆಗಳನ್ನು ಹೇಳುತ್ತಾರೆ.

**ಹಾಲಕ್ಕಿ ಒಕ್ಕಲಿಗರು**: ಉತ್ತರ ಕನ್ನಡ ಜಿಲ್ಲೆಯ ಸಮುದ್ರ ತೀರದ ಉದ್ದಕ್ಕೆ ಹಾಲಕ್ಕಿ ಒಕ್ಕಲಿಗರು ಎಂಬ ಜನಾಂಗವಿದೆ. ಬೇರೆ ಗಿರಿಜನರಿಗಿಂತ ಸಂಖ್ಯೆಯಲ್ಲಿ ಇವರು ಹೆಚ್ಚು. ಹಾಲಕ್ಕಿ ಒಕ್ಕಲಿಗರು ನ್ಯಾಯಕ್ಕೆ, ನೀತಿಗೆ ಮತ್ತು ಸಂಸ್ಕೃತಿಗೆ ಹೆಸರಾದ ಜನಾಂಗ. ಉತ್ತರ ಕನ್ನಡದ ಹೊನ್ನಾವರ, ಅಂಕೋಲಾ, ಕುಮಟ ಹಾಗೂ ಕಾರವಾರ ಜಿಲ್ಲೆಗಳಲ್ಲಿ ಇವರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಆದರೂ ಆಧುನಿಕವಾದ ಜೀವನ ವಿಧಾನಕ್ಕೆ ಇವರು ಒಗ್ಗಿಕೊಂಡಿಲ್ಲ. ಅವರದೇ ಆದ ರೀತಿಯ ಉಡುಗೆತೊಡುಗೆ ತೊಡುತ್ತಾರೆ. ಹಬ್ಬ-ಹರಿದಿನ ಆಚರಿಸುತ್ತಾರೆ. ಹಾಲಕ್ಕಿ ಒಕ್ಕಲಿಗರ ವಿಶೇಷಗಳು ಒಂದೆರಡಲ್ಲ. ನಮ್ಮ ನಾಡಿನ ಪ್ರಾಚೀನ ಸಂಸ್ಕೃತಿ ಇಂದಿಗೂ ಇವರಲ್ಲಿದೆ. ಈ ವಿಶೇಷಗಳನ್ನು ಒಂದೊಂದಾಗಿ ನೋಡೋಣ.

ಇವರ ಆಡಳಿತ ವ್ಯವಸ್ಥೆ ಇಂದಿಗೂ ಮಾದರಿಯಾಗಿದೆ. ಹಲವು ಗುಡಿಸಲುಗಳ ಗುಂಪನ್ನು 'ಕೊಪ್ಪ' ಎಂದು ಕರೆಯುತ್ತಾರೆ. ಇಂಥ ಹಲವಾರು ಕೊಪ್ಪಗಳ ಗುಂಪನ್ನು ಸೀಮೆ ಎಂದು ಕರೆಯುತ್ತಾರೆ. ಹಾಲಕ್ಕಿ ಸಮಾಜದಲ್ಲಿ ಇಂಥ ಏಳು ಸೀಮೆಗಳಿವೆ. ಚಂದಾಪುರ, ಗೋಕರ್ಣ, ಮಸಿಕೋಟೆ, ಕಂಬಾರ ಗದ್ದೆ, ಹರಿಚ್ಚೆ, ಅಂಕೋಲ ಮತ್ತು ಕಡವಾಡಗಳೇ ಆ ಸೀಮೆಗಳು. ಕೊಪ್ಪದ ಆಡಳಿತ ನೋಡಿಕೊಳ್ಳಲು ಮೂರು ಜನ ಇರುತ್ತಾರೆ. ಮೊದಲನೆಯವನು 'ಗೌಡ'. ಎರಡನೆಯವನು 'ಬುದುವಂಥ'. ಮೂರನೆಯವನು 'ಕೋಲಕಾರ'. ಗೌಡನಿಗೆ ಬುದುವಂಥ ನ್ಯಾಯನೀತಿ ಹೇಳಿಕೊಡುವ ನೀತಿವಂತ. ಕೋಲಕಾರನ ಕೆಲಸ ಇವರ ತೀರ್ಮಾನಗಳನ್ನು ಜನಕ್ಕೆ ತಿಳಿಸುವ ಕೆಲಸ. ಇದು ಕೊಪ್ಪದ ಆಡಳಿತವಾಯಿತು.



**ಹಾಲಕ್ಕಿ ಮಹಿಳೆ**

ಇನ್ನು ಸೀಮೆಯ ಆಡಳಿತ ನೋಡಿ. ಇಲ್ಲಿ ನಾಲ್ಕು ಜನ ಮುಖ್ಯಸ್ಥರಿರುತ್ತಾರೆ. ಅವರನ್ನು ಗುರು, ಅರಸ, ಪ್ರಧಾನಿ ಮತ್ತು ಶಾನುಭೋಗ ಎಂದು ಕರೆಯುತ್ತಾರೆ. ಕೊಪ್ಪದಲ್ಲಿ ತೀರ್ಮಾನ ಆಗದೇ ಹೋದ ವಿಚಾರಗಳನ್ನು

ಸೀಮೆಯಲ್ಲಿ ತೀರ್ಮಾನಿಸಲಾಗುತ್ತದೆ. ಹಾಲಕ್ಕಿಗಳ ಈ ಪ್ರಾಚೀನ ಆಡಳಿತ ವ್ಯವಸ್ಥೆ ಇಂದಿಗೂ ಚಾಲ್ತಿಯಲ್ಲಿದೆ. ಇಲ್ಲಿ ನ್ಯಾಯ ನೀತಿ ಮತ್ತು ಧರ್ಮಕ್ಕೆ ಅಪಚಾರವಾಗುವುದಿಲ್ಲ. ಪ್ರಾಚೀನ ಸಮಾಜದ ಈ ಆಡಳಿತ ಇವತ್ತಿಗೂ ಆದರ್ಶವಾಗಿ ಉಳಿಯುತ್ತದೆ.



**ಹಾಲಕ್ಕಿ ಹೆಂಗಸರ ವೇಷಭೂಷಣಗಳು**

ಹಾಲಕ್ಕಿ ಒಕ್ಕಲಿಗರ ಉಡುಪು ತುಂಬಾ ವಿಶೇಷವಾದುದು. ಅದರಲ್ಲಿಯೂ ಹೆಂಗಸರ ಉಡುಪಿನ ರೀತಿ ತುಂಬಾ ಹಳೆಯದ್ದು. ಕುಪ್ಪಸ ಇಲ್ಲದ ಬರೀ ಎದೆಗೆ ಮಣಿಸರಗಳ ಮಾಲೆ. ತೋಳಿಗೆ ತೋಳ ಬಂದಿ, ಮುಂಗೈಗೆ ಬೆಳ್ಳಿ ಕಡಗ, ಕಿವಿಗೆ ಕಡಪು. ಮೂಗಿಗೆ ಮೂಗುತಿ, ಹಣೆಗೆ ಕೆಂಪು ತಿಲಕ. ಇವರ ಬಲವಾದ ಮೈಕಟ್ಟು ಅವರ ದುಡಿಮೆಗೆ ಸಹಾಯಕ. ಹಾಲಕ್ಕಿ ಹೆಂಗಸರು ಕೆಲಸದಲ್ಲಿ ಗಂಡಸರಿಗಿಂತ ಕಡಿಮೆ ಇಲ್ಲ. ಗಂಡಸರು ಗದ್ದೆ ಉತ್ತರೆ, ಹೆಂಗಸರು ಕಾಡಿನಿಂದ ಸೊಪ್ಪು ತರುತ್ತಾರೆ. ಈ ಸೊಪ್ಪನ್ನು ಗದ್ದೆಗೆ ತುಳಿದು ಗೊಬ್ಬರವಾಗಿಸುತ್ತಾರೆ.



**ಹಾಲಕ್ಕಿ ಸುಗ್ಗಿ ಕುಣಿತ**

ಹಾಲಕ್ಕಿಗಳ ಸುಗ್ಗಿ ಹಬ್ಬ ರಂಗುರಂಗಾಗಿರುತ್ತದೆ. ಇದು ರಾಜ್ಯದಲ್ಲೇ ಹೆಸರುವಾಸಿಯಾದುದು. ಇದರಲ್ಲಿ ಹಿರಿಸುಗ್ಗಿ ಮತ್ತು ಕಿರಿಸುಗ್ಗಿ ಎಂದು ಎರಡು ವಿಧ. ಹಿರಿಸುಗ್ಗಿಯನ್ನು ಎರಡು ವರ್ಷಕ್ಕೊಮ್ಮೆ ಮಾಡುತ್ತಾರೆ. ಕಿರಿಸುಗ್ಗಿಯನ್ನು ಪ್ರತಿವರ್ಷ ಮಾಡುತ್ತಾರೆ. ಈ ಸುಗ್ಗಿ ಹಬ್ಬ ನಾನಾ ಆಚರಣೆಗಳನ್ನು ಒಳಗೊಂಡಿರುತ್ತವೆ. ತಲೆಯ ಮೇಲೆ ಬಣ್ಣದ ಗರಿಯ ತುರಾಯಿ, ಕಾಲಿಗೆ ಗೆಜ್ಜೆ, ಕೊರಳಿಗೆ ಮಣಿಗಳ ಹಾರ, ಮೈತುಂಬಾ ನಿಲುವಂಗಿ. ಇದು ಹಾಲಕ್ಕಿ ಗಂಡಸರ ಹಬ್ಬದ ಉಡುಪು. ಹಾಲಕ್ಕಿಯವರ ಮುಖ್ಯ ವಾದ್ಯ 'ಗುಮಟೆ.' ಮಣ್ಣಿನಿಂದ ಮಾಡಿದ ಕೊಳಗಕ್ಕೆ ಉಡದ ಚರ್ಮ ಹೊದಿಸುತ್ತಾರೆ ಮತ್ತೊಂದು

ಕಡೆ ಖಾಲಿ ಬಾಯಿ. ಚರ್ಮದ ಭಾಗವನ್ನು ಬಡಿದಾಗ ಲಯಬದ್ಧವಾದ ಸ್ವರ ಹೊರಡುತ್ತದೆ. ಇಂಥ ನಾಲ್ಕಾರು ಗುಮಟೆಗಳನ್ನು ಬಡಿಯುತ್ತ ತುರಾಯಿ ಇಟ್ಟ ಕಲಾವಿದರು ಕುಣಿಯುತ್ತಾರೆ. ಇದು ಹಲವು ದಿನ ನಡೆಯುತ್ತದೆ. ಯಕ್ಷಗಾನ, ವಿವಿಧ ವೇಷಗಳು, ಸುಗ್ಗಿ ಕುಣಿತ ಇವೆಲ್ಲವನ್ನು ಸೇರಿಸಿ 'ಹಗರಣ' ಆಚರಿಸುತ್ತಾರೆ. 'ಹಗರಣ' ಎಂದರೆ ಹಲವಾರು ಕಲೆಗಳ ಒಟ್ಟುಗೂಡುವಿಕೆ.



**ಹಾಲಕ್ಕಿ ಗುಮಟೆ ವಾದ್ಯ**

ಹಾಲಕ್ಕಿ ಹೆಂಗಸರು ತುಂಬಾ ಹಾಡುಗಳನ್ನು ಹಾಡುತ್ತಾರೆ. ಹಲವಾರು ಕಥೆ, ಹಾಡುಗಳಲ್ಲದೆ ರಾಮಾಯಣ, ಮಹಾಭಾರತಗಳನ್ನು ಜಾನಪದ ಧಾಟಿಯಲ್ಲೇ ಹಾಡುತ್ತಾರೆ. ಒಟ್ಟಿನಲ್ಲಿ ಹಾಲಕ್ಕಿ ಜೀವನ ಮತ್ತು ಕಲೆ ಸಿರಿವಂತವಾಗಿದೆ. ಕೂಲಿ ಮಾಡಿ ಬದುಕಿದರೂ ಅವರು ಬಾಳುವ ಬದುಕು ಸುಂದರವಾಗಿದೆ.

**ಮುಕ್ರಿ**: ಇದೇ ಕರಾವಳಿಯ ಕಣಿವೆಗಳಲ್ಲಿ 'ಮುಕ್ರಿ' ಎಂಬ ಜನಾಂಗದವರೂ ಇದ್ದಾರೆ. ಕಡು ಬಡವರಾದ ಇವರು ಸಂಖ್ಯೆಯಲ್ಲಿಯೂ ಕಡಿಮೆ ಇದ್ದಾರೆ. ಹೆಚ್ಚು ಕಡಿಮೆ ಹಾಲಕ್ಕಿ ಜನಗಳಲ್ಲಿ ಇರುವ ಸಮಾಜದಂತೆಯೇ ಇವರ ಸಮಾಜವೂ ಇರುತ್ತದೆ. ಇವರೂ ಕೂಡ ಸುಗ್ಗಿ ಹಬ್ಬವನ್ನು ಆಚರಿಸುತ್ತಾರೆ. ತೋಟ-ತುಡಿಕೆಗಳಲ್ಲಿ ಕೂಲಿ ಮಾಡಿದರೂ ಹಾಡು-ಕುಣಿತಗಳಿಗೆ ಬರವಿಲ್ಲ.

**ಬಯಲು ಪ್ರದೇಶದ ಗಿರಿಜನರು**: ಇಲ್ಲಿಯವರೆಗೆ ಕರ್ನಾಟಕದ ವಿವಿಧ ಕಾಡುಗಳಲ್ಲಿ ಇರುವ ಜನರನ್ನು ತಿಳಿದುಕೊಂಡೆವು. ಇಂಥ ಜನ ಬಯಲು ಸೀಮೆಯಲ್ಲಿಯೂ ಇಲ್ಲವೇ? ಇದ್ದಾರೆ. ಬಯಲು ಸೀಮೆಯ ಲಂಬಾಣಿಗರು, ಕಾಡು ಗೊಲ್ಲರು, ಮ್ಯಾಸಬೇಡರು, ಹಕ್ಕಿಪಿಕ್ಕಿಯವರೂ, ಬುಡಬುಡಕೆಯವರೂ, ಸುಡುಗಾಡು ಸಿದ್ದರು ಮುಂತಾದ ಜನಾಂಗಗಳನ್ನು ನೆನಪಿಸಿಕೊಳ್ಳಬಹುದು. ಇವರಲ್ಲಿ ಹಕ್ಕಿಪಿಕ್ಕಿಯವರೂ, ಬುಡಬುಡಕೆಯವರೂ, ಸುಡುಗಾಡು ಸಿದ್ದರು ಅಲೆಮಾರಿಗಳು. ಅಂದರೆ ಇವರು ಒಂದು ಕಡೆಗೆ ನಿಲ್ಲುವವರಲ್ಲ, ಆದರೆ ಕಾಡುಗೊಲ್ಲರು, ಮ್ಯಾಸಬೇಡರು ಮತ್ತು ಲಂಬಾಣಿಗಳು ಒಂದು ಕಡೆ ನಿಂತು ಜೀವನ ಮಾಡುತ್ತಿದ್ದಾರೆ.

**ಲಂಬಾಣಿಗಳು**: ಇವರಲ್ಲಿ ಲಂಬಾಣಿಯವರು ಕರ್ನಾಟಕದವರಲ್ಲ. ಒಂದು ಕಾಲಕ್ಕೆ ಉತ್ತರದಿಂದ ವಲಸೆ ಬಂದವರು. ಆದ್ದರಿಂದಲೇ ಇವರ ಭಾಷೆ ಕನ್ನಡವಲ್ಲ. ಆದರೆ ಇಂದು ಕನ್ನಡ ಎಲ್ಲರಿಗೂ ಬರುತ್ತದೆ. ಮನೆಯಲ್ಲಿ ಲಂಬಾಣಿ ಮಾತನಾಡುವ ಇವರು ಹೊರಗಡೆ ಕನ್ನಡ ಮಾತನಾಡುತ್ತಾರೆ. ಲಂಬಾಣಿ ಹೆಣ್ಣುಮಕ್ಕಳ ಕುಣಿತ ತುಂಬಾ ಸುಂದರವಾಗಿರುತ್ತದೆ. ಇವರ ದೇವತೆ ಸೇವಾಬಾಯಿ. ಈಕೆಯ ಆರಾಧನೆಗಾಗಿ ಕುಣಿತ ಮಾಡುತ್ತಾರೆ. ಗುಲ್ಬರ್ಗದಿಂದ ಮೈಸೂರಿನವರೆಗೆ ಎಲ್ಲ




**ಲಂಬಾಣಿ ಕುಣಿತ**

ಕಡೆಯೂ 'ತಾಂಡ'ಗಳಲ್ಲಿ ವಾಸಿಸುತ್ತಾರೆ. ಆಸ್ತಿ-ಪಾಸ್ತಿ ಹೆಚ್ಚಿಲ್ಲ. ಕೂಲಿಯೇ ದುಡಿಮೆಗೆ ಆಧಾರ. ಇವರು ಮೈಗಳ್ಳರಲ್ಲ. ಅಪಾರ ಶ್ರಮಜೀವಿಗಳು.

**ಕಾಡುಗೊಲ್ಲರು**: ಚಿತ್ರದುರ್ಗ, ತುಮಕೂರು, ಶಿವಮೊಗ್ಗ ಮುಂತಾದ ಜಿಲ್ಲೆಗಳ ಬಯಲು ಪ್ರದೇಶದಲ್ಲಿ ಕಾಡುಗೊಲ್ಲರೆಂಬ ಜನರಿದ್ದಾರೆ. ಇವರು ವ್ಯವಸಾಯಗಾರರಲ್ಲ. ಪಶುಸಂಗೋಪನೆ ಇವರ ವೃತ್ತಿ. ಇವತ್ತಿಗೂ ಗಿರಿಜನರ ಎಲ್ಲ ಲಕ್ಷಣಗಳು ಇವರಲ್ಲಿವೆ. 'ಜುಂಜಪ್ಪ' ಇವರ ದೇವರು. ಜುಂಜಪ್ಪನನ್ನು ಕುರಿತು ಅಪಾರ ಕಥೆ ಮತ್ತು ಹಾಡುಗಳನ್ನು ಕಟ್ಟಿದ್ದಾರೆ. ಜುಂಜಪ್ಪನ ಗುಡಿಗಳು ಇವರಿಗೆ ತುಂಬಾ ಪವಿತ್ರ. ತುಂಬಾ ಕಟ್ಟುನಿಟ್ಟಾದ ಆಚರಣೆಗಳನ್ನು ಪಾಲಿಸುತ್ತಾರೆ.

ಕೊಳಲು ಊದುತ್ತಾ ಜುಂಜಪ್ಪನ ಕಥೆಯನ್ನು ಹಾಡುವ ಅನೇಕ ಕಲಾವಿದರಿದ್ದಾರೆ. ಈ ಕಲಾವಿದರ ಹಾಡನ್ನು 'ಗಣೆ ಪದ' ಎಂದು ಕರೆಯಲಾಗುತ್ತದೆ. ಪಶು, ಪಕ್ಷಿ, ಪ್ರಾಣಿಗಳ ಬಗ್ಗೆ ಅಪಾರ ಪ್ರೀತಿ ಇಟ್ಟುಕೊಂಡಿರುವ ಇವರು ಒಂದು ಕಾಲಕ್ಕೆ ನಮ್ಮ ಪರಿಸರವನ್ನು ಕಾಪಾಡಿದವರು.

**ಮ್ಯಾಸಬೇಡರು**: ಚಿತ್ರದುರ್ಗ, ಬಳ್ಳಾರಿ ಮುಂತಾದ ಕೆಲವು ಜಿಲ್ಲೆಗಳಲ್ಲಿ ಕಂಡು ಬರುವ ಮ್ಯಾಸಬೇಡರು ಇನ್ನೊಂದು ರೀತಿಯ ಪ್ರಮುಖ ಜನಾಂಗ. ಮೂಲದಲ್ಲಿ ಬೇಟೆಯೇ ಇವರ ಜೀವನ. ಇವರನ್ನು 'ಅಡವಿ ನಾಯಕರು' ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಇವರು ಊರ ಹೊರಗೆ ವಾಸಿಸುತ್ತಾರೆ. ಈ ತಾಣವನ್ನು ಮ್ಯಾಸಬೇಡರ ಹಟ್ಟಿ ಎಂದು ಕರೆಯಲಾಗುತ್ತದೆ. ಒಂದು ನಂಬಿಕೆಯ ಪ್ರಕಾರ ಆಂಧ್ರದ ಕಡೆಯಿಂದ ಕರ್ನಾಟಕಕ್ಕೆ ಬಂದವರು. ಹಸುಗಳನ್ನು ಮೇಯಿಸುತ್ತ, ಜೊತೆ ಜೊತೆಗೆ ಬೇಟೆ ಮಾಡುತ್ತಾ ಈ ಕಡೆಗೆ ಬಂದಿರಬೇಕು.



**ಗಿರಿಜನರ ಮನೆಯ ಗೋಡೆ ಚಿತ್ತಾರಗಳು**

ಇವರು ಪೆಟ್ಟಿಗೆಯಲ್ಲಿರುವ ದೇವರುಗಳನ್ನು ಪೂಜಿಸುತ್ತಾರೆ. ಮೂಲದಲ್ಲಿ ವಲಸೆಗಾರರಾದುದರಿಂದ ಇವರ ದೇವರುಗಳನ್ನು ಪೆಟ್ಟಿಗೆಯಲ್ಲಿಟ್ಟು ಹೊತ್ತು ತಂದಿರಬಹುದು. ಇವರ ದೇವರುಗಳ ಜಾಗವನ್ನು ಕಟ್ಟೆಮನೆ ಎಂದು ಕರೆಯುತ್ತಾರೆ. ವಿಜಯನಗರದ ಅರಸರ ಕಾಲದಲ್ಲಿ ಸೈನ್ಯಕ್ಕೂ ಇವರು ಸೇರಿದ್ದರಂತೆ.

ಇವರು ತುಂಬಾ ಧೈರ್ಯವಂತರು. ಇವರ ದೇವರುಗಳಾದ ಕರಿಯಮ್ಮ, ಪಾಲೇದೇವರು, ಕಂಪಳ ದೇವರು ಹಾಗೂ ಬೋಸೆ ದೇವರನ್ನು ಕುರಿತು ಅಪಾರ ಹಾಡುಗಳನ್ನು ಹಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಇವರ ಬದುಕು ತುಂಬಾ ಕಷ್ಟದಲ್ಲಿದೆ.

**ಕಾಡು ಹಾಗೂ ಗಿರಿಜನರು**: ಇದುವರೆಗೆ ನಮ್ಮ ರಾಜ್ಯದ ಹಲವಾರು ಗಿರಿಜನರನ್ನು ಕಂಡೆವು. ಹೀಗೆಯೇ ನಮ್ಮ ದೇಶದ ಬೇರೆ ಬೇರೆ ರಾಜ್ಯಗಳಲ್ಲಿಯೂ ಗಿರಿಜನರಿದ್ದಾರೆ. ಅದರಲ್ಲಿಯೂ ಮಧ್ಯಪ್ರದೇಶ, ಹಿಮಾಚಲ ಪ್ರದೇಶ, ಅಸ್ಸಾಂ, ಆಂಧ್ರಪ್ರದೇಶ, ಮುಂತಾದ ರಾಜ್ಯಗಳಲ್ಲಿ ಗಿರಿಜನರ ಸಂಖ್ಯೆ ಹೆಚ್ಚು.

ಮೂಲದ ಜೀವನ ನಡವಳಿಕೆಗಳು ಇವರಲ್ಲಿ ಕಂಡುಬರುತ್ತವೆ. ಇವರದು ಆಡಂಬರದ ಬದುಕಲ್ಲ. ತೋರಿಸಿಕೊಳ್ಳುವ ಚಪಲವಿಲ್ಲ. ವರದಕ್ಷಿಣೆ, ಲಂಚಕೋರತನ, ಮೋಸ, ತಟವಟಿಕೆ, ಇವರಿಂದ ದೂರ. ಇವರ ಆಹಾರ ಪದ್ಧತಿ ತುಂಬಾ ಸರಳ. ಸಾಧ್ಯವಾದರೆ ಬೇಟೆ ಮಾಡುತ್ತಾರೆ. ಇಲ್ಲದಿದ್ದರೆ ಗೆಡ್ಡೆಗೆಣಸು ಹುಡುಕಿ ತಿನ್ನುತ್ತಾರೆ. ಇತ್ತೀಚಿನ ದಿನಗಳಲ್ಲಿ ಅಲ್ಪಸ್ವಲ್ಪ ಬೆಳೆಯನ್ನು ಬೆಳೆಯುತ್ತಾರೆ. ಗಂಜಿ ಇವರ ಸಾಮಾನ್ಯ ಆಹಾರ.

ಕಾಡಿನ ಬಗ್ಗೆ ಇವರಿಗೆ ಎಲ್ಲಿಲ್ಲದ ಪ್ರೀತಿ. ಮಾತೆತ್ತಿದರೆ ಮರಗಿಡಗಳನ್ನು ಕಡಿಯುವ ನಾವು ಗಿರಿಜನರನ್ನು ನೋಡಿ ಕಲಿಯಬೇಕಾಗಿದೆ. ಮರಗಿಡಗಳನ್ನು ದೇವರು ಎಂದು ಪೂಜಿಸಿದರು ಗಿರಿಜನರು. ಅವರ ಮಕ್ಕಳಿಗೆ ಮರ, ಗಿಡ, ಗುಡ್ಡ ಬೆಟ್ಟಗಳ ಹೆಸರನ್ನೇ ಇಡುತ್ತಾರೆ. ಆದರೆ ಪಟ್ಟಣದವರಾದ ಅಥವಾ ಬಯಲು ಸೀಮೆಯ ಹಳ್ಳಿಗಾಡಿನ ನಾವು ಮರಗಳ ಬಗ್ಗೆ ಏಕೆ ಪ್ರೀತಿ ಇಟ್ಟುಕೊಂಡಿಲ್ಲ? ಮರಗಳು ಮೋಡವನ್ನು ತರುತ್ತವೆ, ಮಳೆಯನ್ನು ತರುತ್ತವೆ. ಹಾಗಾದಾಗ ಬೆಳೆ ಬೆಳೆಯುತ್ತದೆ. ಬೆಳೆ ಬೆಳೆದರೆ ಸುಖ ತಾನಾಗಿ ಬರುತ್ತದೆ.

ಇದನ್ನು ಗಿರಿಜನರು ಕಂಡುಕೊಂಡಿದ್ದಾರೆ. ಆದ್ದರಿಂದಲೇ ಮರಗಿಡಗಳನ್ನು ಪ್ರೀತಿಸುತ್ತಾರೆ. ಅವರು ವಾಸಿಸುವ ಕಾಡನ್ನು ಕಡಿಯುವ ಮೂಲಕ ನಾವು ಅವರಿಗೆ ಅಪಚಾರ ಮಾಡುತ್ತಿದ್ದೇವೆ. ಅಂದರೆ ಕಾಡನ್ನು ಬಯಲು ಮಾಡುವ ಮೂಲಕ ಅವನ್ನು ಈಚೆ ತಳ್ಳುತ್ತಿದ್ದೇವೆ. ಅತ್ತ ಬೇಟೆಯೂ ಇಲ್ಲದೆ, ಇತ್ತ ಗೆಡ್ಡೆ ಗೆಣಸು ಇಲ್ಲದೆ ಅವರು ಕಂಗಾಲಾಗಿದ್ದಾರೆ. ಸರ್ಕಾರದ ಯಾವ ಸವಲತ್ತು ಅವರಿಗೆ ಸಿಗುತ್ತಿಲ್ಲ. ಅವರ ಕಾಡಿನಲ್ಲಿ ಅವರ ಪಾಡಿಗೆ ಅವರು ಇದ್ದರು. ಆದರೆ ಈ ನಾಗರಿಕ ಲೋಕದ ನಾವು ಅವರ ಬುಡಕ್ಕೆ ಕೊಡಲಿ ಹಾಕುತ್ತಿದ್ದೇವೆ ಅಲ್ಲವೆ? ಹೀಗಾಗಬಾರದು. ಮೂಲನಿವಾಸಿಗಳಾದ ಇವರನ್ನ, ಇವರ ಬದುಕನ್ನ ನಾವೆಲ್ಲ ಹಸನಾಗಿ ಇಡಬೇಕು. ಅವರಿಗೆ ತೊಂದರೆ ಆಗದಂತೆ ಬದುಕಬೇಕು. ಮುಖ್ಯವಾಗಿ ಅವರ ಕಾಡನ್ನು ಅವರಿಗೆ ಬಿಟ್ಟುಕೊಡಬೇಕು.

***



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು